ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಸೌಕೂರಿನ ಬಳಿ ವಾರಾಹಿ ನದಿಯಿಂದ ಕೈಗೊಳ್ಳುತ್ತಿರುವ ಏತ ನೀರಾವರಿ ಯೋಜನೆ ಕುರಿತು

ಶ್ರೀ ಕೆ. ಹರೀಶ್ ಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು):-

1290 (1815) ಮಾನ್ಯ ಜಲಸಂಪನ್ಮೂಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕರ್ನಾಟಕ ನೀರಾವರಿ ನಿಗಮದಿಂದ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಸೌಕೂರಿನ ಬಳಿ ವಾರಾಹಿ ನದಿಯಿಂದ ಕೈಗೊಳ್ಳುತ್ತಿರುವ ಏತ ನೀರಾವರಿ ಯೋಜನೆಗೆ ತಗಲುವ ಅಂದಾಜು ವೆಚ್ಚ ಎಷ್ಟು; ಕಾಮಗಾರಿ ಪೂರ್ಣಗೊಳಿಸಲು ಅವಶ್ಯವಿರುವ ಅವಧಿ ಎಷ್ಟು;

(ಆ) ಈ ಯೋಜನೆಯ ಎಲ್ಲಾ ತಾಂತ್ರಿಕ ಮಾಹಿತಿ ಜೊತೆಗೆ ಅಚ್ಚುಕಟ್ಟು ಪ್ರದೇಶದ ಗ್ರಾಮವಾರು, ಸರ್ವೆ ನಂಬರ್‌ವಾರು ಮಾಹಿತಿ ನೀಡುವುದು;

(ಇ) ಯಶಸ್ವಿ ಗುತ್ತಿಗೆದಾರರೊಂದಿಗೆ ಒಪ್ಪಂದ ಕರಾರು ಮಾಡಿಕೊಳ್ಳಲಾಗಿದೆಯೇ; (ಪ್ರತಿ ನೀಡುವುದು)

(ಈ) ಈ ಯೋಜನೆಯಲ್ಲಿ ನೀರು ಪಂಪ್ ಮಾಡಲು ಬಳಸುತ್ತಿರುವ ಪಂಪ್‌ಸೆಟ್‌ಗಳ ಸಾಮರ್ಥ್ಯ (hpಗಳಲ್ಲಿ) ಮತ್ತು ಸಂಖ್ಯೆ ಹಾಗೂ ಪೈಪ್‌ಗಳ ವ್ಯಾಸವೆಷ್ಟು ? (ವಿವರ ಒದಗಿಸುವುದು)